## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ ; 448
2. ವಿಧಾನ ಪರಿಷತ್ತ ಸದಸ್ಯರು : ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)
3. ಉತ್ತರಿಸ ಬೇಕಾದ ದಿನಾಂಕ : 04.02.2021
4. ಉತ್ತರಿಸ ಬೇಕಾದ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಸರ್ಕಾರದ ವಿವಿಧ ಇಲಾಖೆಗಳಡಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಲು ಮತ್ತು ಖಾಲಿ ಹುದ್ದೆಗಳನ್ನು ತುಂಬಲು ಸಾಕಷ್ಟು ಪ್ರಸ್ತಾವನೆಗಳು ಸ್ವೀಕೃತವಾಗಿರವುದು ನಿಜವೇ; | ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ವೇತನುದಾನಕ್ಕೆ ಒಳಪಡಿಸಲು ಮತ್ತು ಖಾಲಿ ಹುದ್ದೆಗಳನ್ನು ತುಂಬಲು ಪ್ರಸ್ತಾವನೆಗಳು ಸ್ವೀಕೃತವಾಗಿರುತ್ತವೆ. |
| (ಆ) | ಒಂದೊಂದು ಪ್ರಸ್ತಾವನೆಯೂ ಒಂದೊಂದು ಕುಟುಂಬದ ಜೀವನವನ್ನು ಒಳಗೊಂಡಿದ್ದು, ಇಂತಹ ಪ್ರಸ್ತಾವನೆಗಳನ್ನು ಅನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಸರ್ಕಾರವು ಸಂಖ್ಯೆ: ಆಇ/157/ವೆಚ್ಚ-8/2020, ದಿನಾಂಕ:10.06.2020 ರಂತೆ ಆರ್ಥಿಕ ಇಲಾಖೆಯಿಂದ ಸುತ್ತೋಲೆಯನ್ನು ಹೊರಡಿಸಿ ಈ ಪ್ರಸ್ತಾವನೆಗಳನ್ನು ವಿಲೆ ಇಟ್ಟಿರುವುದು ನಿಜವೇ; | ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ರಾಜ್ಯದಲ್ಲಿ ತೀವ್ರ ಆರ್ಥಿಕ ಸಂಕಷ್ಟ ಸೃಷ್ಟಿಯಾಗಿರುವ ಹಿನ್ನೆಲೆಯಲ್ಲಿ ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8 2020, ದಿನಾಂಕ:10.06.2020 ರನ್ವಯ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ ರಾಜೀನಾಮೆ ಇತರೆ ಯಾವುದೇ ಕಾರಣಗಳಿಂದ ಖಾಲಿಯಾಗುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆ ಹಾಗೂ ಸುತ್ತೋಲೆ ಸಂಖ್ಯೆ:ಆಇ 03 ಬಿಇಎಂ 2020, ದಿನಾಂಕ:06.07.2020 ರನ್ವಯ 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳು ಮತ್ತು ಬ್ಯಾಕ್ ಲಾಗ್ ಹುದ್ದೆಗಳೂ ಸೇರಿದಂತೆ ರಾಜ್ಯ ಸಿವಿಲ್ ಸೇವೆಯಲ್ಲಿನ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಸಹ ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ. |
| (ಇ) | ಈ ಆರ್ಥಿಕ ಇಲಾಖೆಯ ಸುತ್ತೋಲೆಯಿಂದ ಸಾವಿರಾರು ಕುಟುಂಬಗಳು ಬೀದಿಗೆ ಬೀಳುವ ಪರಿಸ್ಥಿತಿಗೆ ಬಂದಿದ್ದು, ಸರ್ಕಾರವು ಯಾವ ಕಾಲಮಿತಿಯೊಳಗೆ ಆರ್ಥಿಕ ಇಲಾಖೆಯ "ಆರ್ಥಿಕ ಮಿತವ್ಯಯ" ಸುತ್ತೋಲೆಯನ್ನು ಹಿಂಪಡೆಯಲಾಗುವುದು? | ರಾಜ್ಯದ ಆರ್ಥಿಕ ಸ್ಥಿತಿಯು ಸುಸ್ಥಿತಿಗೆ ಬಂದ ನಂತರ ಈ ಸಂಬಂಧ ಪರಿಶೀಲಿಸಲಾಗುವುದು. |

ಸಂಖ್ಯೆ: ಆಇ 16 ವೆಚ್ಚ-8/2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ